# 112

# ಕರ್ಣಾಟಕ ಕವಿ ಚರಿತ್ರೆ

(ಸಂಗ್ರಹ)

ಸಂಗ್ರಾಹಕರು: **ಶ್ರೀ| ಬಿ. ಈಶ್ವರಯ್ಯ.**

[ನೃಪತುಂಗ, ಆದಿಪಂಪ, ಪೊನ್ನ, ರನ್ನ, ನಾಗಚಂದ್ರ, ಹರಿಹರ, ರಾಘವಾಂಕ, ನೇಮಿಚಂದ್ರ, ಪಾಲ್ಕುರಿಕೆ ಸೋಮನಾಥ, ಜನ್ನ, ಕುಮಾರ ವ್ಯಾಸ, ಕುಮಾರ ವಾಲ್ಮೀಕಿ, ಲಕ್ಷ್ಮೀಶ ಮೊದಲಾದವರು.]

**1956.**




ಒಂದಾಣೆ ಮಾಲೆ

## 'ಒಂದಾಣೆ ಮಾಲೆ'ಯ ಪ್ರಕಟಣೆಗಳು:

೧*ಕೆಪ್ಪಟಿರಾಯ; ೨ ನಾತೀಶ್ವರರು(ದ್ವಿ. ಮುದ್ರಣ); ೩ ಕಳ್ಳನಿಗೆ ಸಂಭಾವನೆ (ದ್ವಿ. ಮುದ್ರಣ) ೪ *ಸದ್ರಿಸುಬ್ಬ; ೫ ಅದ್ಭುತ ತ್ಯಾಗ (ದ್ವಿ. ಮುದ್ರಣ); ೬ *ಚುನಾವಣೆ ಅರ್ಥಾತ್ ಬನಾವಣೆ; ೭*ಬೀಡಿ ಸೇದಬೇಡಿ ಮತ್ತು ಆ ಮಗು; ೮*ಇಂಗ್ಲಿಷ್–ಕನ್ನಡ ಅರ್ಥಕೋಶ; ೯ ಲಂಚಕ್ಕೆ ಸಂಚಕಾರ (ದ್ವಿ. ಮುದ್ರಣ); ೧೦ *ಟಿಶ್ಯೂ ಔಷಧಿಗಳ ಕೈಪಿಡಿ; ೧೧ ಶ್ರೀಕ್ಷೇತ್ರ ಧರ್ಮಸ್ಥಳ (ಚ. ಮುದ್ರಣ); ೧೨*ಜೀವದ ಮೌಲ್ಯ ಮತ್ತು ಇತರ ಕಥೆಗಳು; ೧೩ ಸತ್ತವನ ಸೇಡು ಮತ್ತು ಇತರ ಕಥೆಗಳು; ೧೪ *ವೆಂಕಟನ ಸಂಕಟ; ೧೫ ಬಾಬಿಗೆ ಬಾಸಿಂಗ (ದ್ವಿ. ಮುದ್ರಣ); ೧೬ ವೇಣೂರಿನ ಗತವೈಭವ(ದ್ವಿ. ಮುದ್ರಣ); ೧೭ ಒಗಟುಗಳು (ದ್ವಿ. ಮುದ್ರಣ); ೧೮ *ಜಗಳಗಂಟಿ ಮತ್ತು ಇತರ ಕಥೆಗಳು; ೧೯ ರಥೋತ್ಸವ; ೨೦ ಕರಿನಾಯಿ ಮತ್ತು ಮುಪ್ಪು; ೨೧ ಭಾರತದ ಮಹಾನಗರ–I(ದ್ವಿ. ಮುದ್ರಣ); ೨೨ ತಿರುಕ್ಕುರಲ್ (ದ್ವಿ. ಮುದ್ರಣ); ೨೩ ಸೂರ್ಯನ ಸಂಸಾರ; ೨೪ ಭಾರತದ ಮಹಾನಗರ-II (ದ್ವಿ. ಮು); ೨೫ ಧೈರ್ಯ ಮತ್ತು ಇತರ ಸತ್ಯಕಥೆಗಳು; ೨೬ ಮಾರಾವತಾರ(ದ್ವಿ. ಮು); ೨೭*ಹಾಸವಿಲಾಸ; ೨೮ ಸತ್ಯವಂತ ಬಾಬಿ [ದ್ವಿ. ಮುದ್ರಣ]; ೨೯ ಜಾಣ್ಮೆಯ ಒಗಟುಗಳು (ದ್ವಿ. ಮು); ೩೦ ಜಾತಕ ಕಥೆಗಳು; ೩೧ ಕಾರ್ಕಳದ ಚರಿತ್ರೆ; ೩೨ ಮರ್ಜಿ; ೩೩ ದರ್ಶನದ ಕಥೆಗಳು; ೩೪ ಅಳುವಿನ ಹೊಳೆ ಮತ್ತು ಕೇಶವಭೂಪ; ೩೫ ತರಾಬಿನ ಪೀಪಾಯಿಗಳು; ೩೬ ಉಪದೇಶ ಶತಕ; ೩೭*ನಿಮಗೆ ಗೊತ್ತಿದೆಯೇ?; ೩೮ ಚತುರ ಚಮತ್ಕಾರ; ೩೯ ಸತೀ ಸಾವಿತ್ರಿ (ದ್ವಿ. ಮುದ್ರಣ); ೪೦ ಆಭರಣಗಳ ಪೆಟ್ಟಿಗೆ ಮತ್ತು ಇತರ ಕಥೆಗಳು; ೪೧ ಭಾರತದ ಮಂತ್ರಿಮಂಡಲಗಳು(ದ್ವಿ. ಮುದ್ರಣ); ೪೨ ಕಾಲುಬಳೆಯ ಕಥೆ; ೪೩ ಭಾರತದ ನಾಲ್ಕು ಕಲಶಗಳು; ೪೪ ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು; ೪೫ ಸುಭಾಷಿತ; ೪೬ ೧೮೫೭ರ ಸಿಪಾಯಿದಂಗೆ; ೪೭ ಅಕಾಂಡ ತಾಂಡವ; ೪೮ ಸಾಹಸದ ಕಥೆಗಳು; ೪೯ ಸಂಜ್ಞಾಜ್ಞಾನಕೋಶ; ೫೦ ಪಂಡಿತನ ಪಿಟೀಲು; ೫೧ ಭೋಗಯಾತ್ರೆ; ೫೨ ಸಂಗ್ರಾಮಸಿಂಹ; ೫೩ ಧರ್ಮಶಿಕ್ಷಾ; ೫೪ ಮಹಾತ್ಮ; ೫೫ ಮೀರಾಬಾಯಿ; ೫೬ ವೀರರಮಣಿ ಕರ್ಮದೇವಿ; ೫೭ ಅರಳಿದ ನಗು; ೫೮ ಸಚಿತ್ರ ಜಪಾನ್; ೫೯ ಚುಟ್ಟಬಿಟ್ಟಧಿಟ್ಟ; ೬೦ ನಿರಪರಾಧಿ; ೬೧ ಭಕ್ತವಾಣಿ; ೬೨ ಜಾನಪದ ಸಾಹಿತ್ಯ; ೬೩ ಡಾಕ್ಟರ್ ಆರೋಗ್ಯವರ್; ೬೪ ಲೌಕಿಕ ನ್ಯಾಯಗಳು; ೬೫*ಶಿಶುಪಾಲ ಮಾನಭಂಗ; ೬೬ ಜರಾಸಂಧ ವಧೆ; ೬೭ ಜವಾಹರಲಾಲ (ದ್ವಿ. ಮುದ್ರಣ); ೬೮ ಕರುಣೆ ಮತ್ತು ಇತರ ಕಥೆಗಳು; ೬೯*ಶ್ರೀಕ್ಷೇತ್ರ ಉಡುಪಿ; ೭೦ ವಿನೋದ ವಿಹಾರ; ೭೧ ಭಾರತದ ಗತವೈಭವ; ೭೨ ಸತ್ಯ ಹರಿಶ್ಚಂದ್ರ; ೭೩ ಸೂಕ್ತಿಗಳು; ೭೪ ಉ.ಕ.ದ ಯಕ್ಷಗಾನ ಕಲಾವಿದರು; ೭೫ ದೇವರ ಸಾಮ್ರಾಜ್ಯದಲ್ಲಿ...; ೭೬ ಕ್ರಾಂತಿಕಂಠೀರವ ಭಗತ್‌ಸಿಂಘ್; ೭೭ ಜಾತಕಪಠನ ಮತ್ತು ಇತರ ಕಥೆಗಳು; ೭೮ ಅಮೃತವಾಣಿ; ೭೯ ಮಾಯಾಮೃಗ; ೮೦ ಡಾಕ್ಟರ್ ಗಾಂಧೀಜಿ; ೮೧ ಆದಿಶ್ರೀ ಶಂಕರಾಚಾರ್ಯರ ಜೀವನ ಚರಿತ್ರೆ (ದ್ವಿ. ಮುದ್ರಣ;) ೮೨ ಆದಿಶ್ರೀ ಶಂಕರಾಚಾರ್ಯ ವಿರಚಿತ ಸ್ತೋತ್ರಗಳು ೮೩ ಬೆಡಗಿನ ನಾಡು ಕೊಡಗು; ೮೪ ಆನೆಯ ಚಿಪ್ಪು ಮತ್ತು ಇತರ ಸತ್ಯಕಥೆಗಳು; ೮೫ ಮಂಗಳೂರಿಂದ ಮಧುರೆಗೆ; ೮೬ ಸತೀ ವೃಂದಾ; ೮೭ ಗೌತಮನ ಗೃಹತ್ಯಾಗ; ೮೮ ಗೃಹವೈದ್ಯ; ೮೯ ನಮ್ಮ ನಾಟಕಗಳು; ೯೦ ಜಾನಪದ ಕಥೆಗಳು; ೯೧ ಕೆಲವು ಉಪಯುಕ್ತ ಸಲಹೆಗಳು. ೯೨ ಅಭಿಜ್ಞಾನ ಶಾಕುಂತಲದಲ್ಲಿ ಲೋಕನೀತಿ. ೯೩ ಹೋಮಿಯೋಪತಿ-ಚಿಕಿತ್ಸಾಸಾರ. ೯೪ ಯಕ್ಷಗಾನ ನಾಟಕದ ಪರಂಪರೆ; ೯೫ ಪುನರುಜ್ಜೀವನ (ಏಕಾಂಕ ನಾಟಕ); ೯೬ ಪ್ರಥಮ ಚಿಕಿತ್ಸೆಯ ಕೈಪಿಡಿ; ೯೭ ಹಸ್ತರೇಖಾ ವಿಜ್ಞಾನ; ೯೮ ಸ್ವಾತಂತ್ರ್ಯ; ೯೯ ಭಾರತೀಯ ಸ್ವಾತಂತ್ರ್ಯ ಸಂಗ್ರಾಮ; ೧೦೦ ಭಕ್ತ ಕುಚೇಲ; ೧೦೧ ಉತ್ತರನ ಪೌರುಷ; ೧೦೨ ಕುಮಾರ; ೧೦೩ ಕೇರಳ ಜ್ಯೋತಿಷ. ೧೦೪ ಒಗಟುಗಳ ಗೊಂಚಲು. ೧೦೫ ಊರ-ಔಷಧಿಗಳು; ೧೦೬ ಮದ್ವೆ ಅವಾಂತರ; ೧೦೭ ಜಗತ್ತಿನ ವಿಜ್ಞಾನಿಗಳು; ೧೦೮ ನಮ್ಮ ದೇಶ; ೧೦೯ ಗ್ರಾಮ ಸ್ವಾತಂತ್ರ್ಯ. ೧೧೦. ನಮ್ಮ ಕನ್ನಡನಾಡು. ೧೧೧. ಭಕ್ತ ಧ್ರುವ (ಏಕಾಂಕ ನಾಟಕ); ೧೧೨. ಕರ್ನಾಟಕ ಕವಿಚರಿತ್ರೆ.

*ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

# ಕರ್ಣಾಟಕ ಕವಿಚರಿತ್ರೆ

.........

## ೧. ನೃಪತುಂಗ

ಕಾಲ: ಕ್ರಿ. ಶ. ೮೧೪-೮೭೭. ಈತನು ರಚಿಸಿದ ಗ್ರಂಥಗಳು:-೧. ಕವಿರಾಜ ಮಾರ್ಗ. ೨. ಪ್ರಶ್ನೋತ್ತರ ಮಾಲೆ. ಬಿರುದು: ನರಲೋಕ ಚಂದ್ರ. ೨. ಕೃತಕೃತ್ಯ ಮಲ್ಲವಲ್ಲಭ. ೩. ಪರಮ ಸರಸ್ವತೀ ತೀರ್ಥಾವತಾರ.

ಇವನು ರಾಷ್ಟ್ರಕೂಟ ವಂಶದ ದೊರೆ. ಈತನಿಗೆ ಅಮೋಘವರ್ಷ, ಅತಿಶಯ ಧವಳ—ಎಂಬ ಹೆಸರುಗಳೂ ಇವೆ. ಸಂಸ್ಕೃತದಲ್ಲಿ ಆದಿಪುರಾಣವನ್ನು ಬರೆದ ಜಿನಸೇನನ ಶಿಷ್ಯನು (೭೮೩). ಈತನ ರಾಜಧಾನಿ 'ಮಾನ್ಯಖೇಟ'. ಹೈದರಾಬಾದಿನಲ್ಲಿರುವ ಮಾಲ್‌ಖೇಡ್ ಎಂಬುದೇ ಹಿಂದಿನ 'ಮಾನ್ಯಖೇಟ'. ಸಾಧಾರಣ ೬೨ ವರ್ಷಗಳ ವರೆಗೆ ರಾಜ್ಯವಾಳಿದನು. ಬಳಿಕ ಅವನೇ ರಾಜ್ಯವನ್ನು ತ್ಯಜಿಸಿದನೆಂದು ಈತನು ಬರೆದಿರುವ 'ಪ್ರಶ್ನೋತ್ತರ ಮಾಲೆ'ಯೆಂಬ ಗ್ರಂಥದ ಅಂತ್ಯ ಶ್ಲೋಕದಿಂದ ವಿದಿತವಾಗುತ್ತದೆ. ಅತಿಶಯ ಧವಳನೆಂದರೆ ಇವನೇ ಎಂಬುದು ಇವನು ಬರೆದಿರುವ ಗ್ರಂಥದಿಂದಲೂ ಶಾಸನಗಳಿಂದಲೂ ತಿಳಿಯುತ್ತದೆ. 'ಅತಿಶಯಧವಳೋಕ್ತಕ್ರಮದೆ', 'ಅತಿಶಯಧವಳೋರ್ವೀಶೋದಿತಾಲಂಕೃತಿ', 'ಅಗದೆಂದನತಿಶಯ ಧವಳಂ' ಎಂದಿರುತ್ತದೆ.

ಇವನ ಗ್ರಂಥ: ಕವಿರಾಜಮಾರ್ಗ—ಇದು ಅಲಂಕಾರ ಗ್ರಂಥ.

## ೨. ಆದಿ ಪಂಪ

ಇವನ ಕಾಲ: ಕ್ರಿ. ಶ. ೯೪೧. ಗ್ರಂಥಗಳು:-೧. ಆದಿಪುರಾಣ. ೨. ಭಾರತ ಅಥವಾ ವಿಕ್ರಮಾರ್ಜುನ ವಿಜಯ. ಬಿರುದು: ೧. ಕವಿತಾಗುಣಾರ್ಣವ. ೨. ಪುರಾಣ ಕವಿ. ೩. ಸುಕವಿಜನಮನೋಮಾನಸೋತ್ತಂಸಹಂಸ. ೪. ಸರಸ್ವತೀಮಣಿಹಾರ. ೫. ಸಂಸಾರಸಾರೋದಯ.

ಈತನು ದುಂದುಭಿ ಸಂವತ್ಸರದಲ್ಲಿ ಹುಟ್ಟಿದನೆಂದು ಆದಿಪುರಾಣದಲ್ಲಿ ತಿಳಿದುಬರುತ್ತದೆ. ವೆಂಗಿಮಂಡಲದ ವೆಂಗಿಪಳುವಿಗೆ ಸೇರಿದ ವಸಂತ, ಕೊಟ್ಟೂರು, ನಿಡುಗುಂದಿ, ವಿಕ್ರಮಪುರ ಎಂಬ ಅಗ್ರಹಾರಗಳಲ್ಲಿ ಅಗ್ರ ಗಣ್ಯನಾಗಿ ವತ್ಸಗೋತ್ರೋದ್ಭವನಾದ ಮಾಧವ ಸೋಮಯಾಜಿಯೆಂಬ ಬ್ರಾಹ್ಮಣನಿದ್ದನು. ಅವನ ಮಗ ಅಭಿಮಾನ ಚಂದ್ರ; ಈತನ ಮಗ ಕೊಮರಯ್ಯ; ಅವನ ಮಗ ಅಭಿರಾಮ ದೇವರಾಯ. ಈತನು ಮತಗಳೆಲ್ಲೆಲ್ಲಾ ಜೈನಮತವೇ ಶ್ರೇಷ್ಠವೆಂದು ತಿಳಿದು ಜಿನಧರ್ಮವನ್ನು ಸ್ವೀಕರಿಸಿದನು. ಇವನ ಮಗನೇ ಪಂಪನು! ಈತನು ಜೈನಕವಿ. ಕೊಂಡಾನ್ವಯಕ್ಕೆ ಸೇರಿದವನೆಂದು ಹೇಳಿಕೊಂಡಿರುತ್ತಾನೆ. ಈತನ ಗುರು ದೇವೇಂದ್ರ ಮುನಿ. ಈ ಮುನಿಯು ರಾಜಪೂಜಿತನೆಂದು ಶಾಸನದಿಂದ ತಿಳಿದುಬರುತ್ತದೆ. ಈ ಕವಿಯು ಪುಲಿಗೆರೆಯ ರಾಜನಾದ ಚಾಳುಕ್ಯವಂಶೋತ್ಪನ್ನನಾದ ಅರಿಕೇಸರಿಯ ಆಸ್ಥಾನಪಂಡಿತನಾಗಿದ್ದನು. ಗ್ರಂಥ: ವಿಕ್ರಮಾರ್ಜುನ ವಿಜಯ—ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿ, ಅವನ ಪರಾಕ್ರಮಾದಿಗಳನ್ನು ಹೊಗಳಿದ್ದಾನೆ. ರಾಜನು ಕವಿಗೆ ಬಚ್ಚಿಸಾಸಿರ ದಲ್ಲಿರುವ ಧರ್ಮಪುರವೆಂಬ ಒಂದು ಅಗ್ರಹಾರವನ್ನು ಕೊಟ್ಟನು.

ಆದಿಪುರಾಣ: ಆದಿತೀರ್ಥಂಕರನಾದ ಪುರುದೇವನ ಚರಿತವು ಚಂಪೂ ಕಾವ್ಯವು.

ಭಾರತ: ಚಂಪೂರೂಪ. ಪಾಂಡವರ ಜನನದಿಂದ ಕೌರವರ ವಧೆಯ ವರೇಗೆ. ಇದರಲ್ಲಿ ಧರ್ಮರಾಯನ ಬದಲಿಗೆ ಅರ್ಜುನನಿಗೆ ಪಟ್ಟಾಭಿಷೇಕವಾದಂತೆ ವರ್ಣಿಸಿರುತ್ತಾನೆ.

## ೩. ಪೊನ್ನ

ಕಾಲ: ಸುಮಾರು ಕ್ರಿ. ಶಕ ೯೫೦. ಗ್ರಂಥಗಳು: ೧. ಶಾಂತಿಪುರಾಣ. ೨. ಜಿನಾಕ್ಷರಮಾಲೆ. ೩. ರಾಮಕಥೆ ಅಥವಾ ಭುವನೈಕ ರಾಮಾಭ್ಯುದಯ ಮತ್ತು ಸಂಸ್ಕೃತದಲ್ಲಿ 'ಗತಪ್ರತ್ಯಾಗತ' ಎಂಬ ಕೃತಿಯು ರಚಿತವಾಗಿರಬೇಕು. ಆದರೆ, ಕೊನೆಯವೆರಡು ಕೃತಿಗಳೂ ಸಿಕ್ಕಿಲ್ಲ.

ಈತನು ಜೈನಕವಿ. ಈತನಿಗೆ: ಪೊನ್ನ ಪೊನ್ನಿಗ, ಪೊನ್ನಮಯ್ಯ, ಸವಣ, ಕುರುಳ್ಗಳ ಸವಣ ಎಂಬ ಹೆಸರುಗಳೂ ಇವೆ. ಬಿರುದು:

೧. ಕವಿಚಕ್ರವರ್ತಿ. ೨. ಉಭಯ ಕವಿಚಕ್ರವರ್ತಿ. ೩. ಸರ್ವದೇವ ಕವೀಂದ್ರ. ೪. ಸೌಜನ್ಯ ಕುಂದಾಂಕುರ.

ಈತನ ಗುರು ಇಂದ್ರನಂದಿ. ಈತನು ಬಹಳ ಪ್ರಸಿದ್ಧನಾದ ಕವಿ. ಇವನನ್ನು ಅನೇಕ ಕವಿಗಳು ಹೊಗಳಿದ್ದಾರೆ. ಪಾರ್ಶ್ವಪಂಡಿತ (೧೨೦೫), ನಯಸೇನ (೧೧೧೨), ನಾಗವರ್ಮ I (೧೧೪೫), ರುದ್ರಭಟ್ಟ (೧೧೮೦), ಕೇಶಿರಾಜ (೧೨೬೦), ಮಧುರ (೧೩೮೫) ಮೊದಲಾದ ಕವಿಗಳು ಈತನನ್ನು ಹೊಗಳಿದ್ದಾರೆ. ರತ್ನತ್ರಯರ ಸಾಲಿನಲ್ಲಿ (ಪಂಪ-ಪೊನ್ನ-ರನ್ನ) ಈತನೂ ಸೇರಿದ್ದಾನೆ.

ಶಾಂತಿಪುರಾಣ: ಹದಿನಾರನೆಯ ತೀರ್ಥಂಕರನಾದ ಶಾಂತಿನಾಥನ ಚರಿತವು ಚಂಪೂರೂಪವಾಗಿದೆ. ಇದಕ್ಕೆ 'ಪುರಾಣ ಚೂಡಾಮಣಿ' ಎಂಬ ಹೆಸರೂ ಇದೆ. ಜಿನಾಕ್ಷರಮಾಲೆ—ಜಿನಸ್ತುತಿರೂಪವಾದ ಗ್ರಂಥ. ಮೂವತ್ತೊಂಭತ್ತು ಕಂದಪದ್ಯಗಳಿವೆ. ಇವನ ಬಂಧವು ಪ್ರೌಢವಾಗಿದೆ.

## ೪. ಚಾವುಂಡರಾಯ

ಕಾಲ: ಸುಮಾರು ಕ್ರಿ. ಶ. ೯೭೮. ಗ್ರಂಥ: ಚಾವುಂಡರಾಯ ಪುರಾಣ ಅಥವಾ ತ್ರಿಷಷ್ಟಿ ಲಕ್ಷಣ ಮಹಾಪುರಾಣ.

ಇವನು ಬ್ರಹ್ಮಕ್ಷತ್ರಿಯ ವಂಶದಲ್ಲಿ ಹುಟ್ಟಿದವನು. ಅಜಿತಸೇನಾಚಾರ್ಯನ ಶಿಷ್ಯನಾದ "ಗಂಗಕುಲಾಬ್ಧಿ ಚಂದ್ರ" "ಗಂಗಕುಲ ಚೂಡಾಮಣಿ; ಜಗದೇಕವೀರ; ಧರ್ಮಾವತಾರ" ಮೊದಲಾದ ಬಿರುದುಳ್ಳ ರಾಚಮಲ್ಲನು (೯೭೪—೯೮೪) 'ಪರಮ ಸ್ವಾಮಿ' ಈ ರಾಚಮಲ್ಲನಲ್ಲಿ ಸೇನಾನಾಯಕನಾಗಿಯೂ, ಮಂತ್ರಿಯಾಗಿಯೂ ಇದ್ದನು. ಶ್ರವಣಬೆಳ್ಗೊಳದಲ್ಲಿ ಧನವ್ಯಯಮಾಡಿ, ಗೋಮಟೇಶ್ವರ ಪ್ರತಿಷ್ಠೆಯನ್ನು ಮಾಡಿಸಿದನು. ಈತನಿಗೆ 'ಅಣ್ಣ'ನೆಂದೂ ಹೆಸರಿತ್ತು. ಈತನು ಗೋವಿಂದ ರಾಜನನ್ನು ಬೆಂಕೊಂಡು ರಾಚಯನನ್ನು ಕೊಂದು ಕೀರ್ತಿಯನ್ನು ಹೊಂದಿದಂತೆ ಹೇಳಿಕೊಳ್ಳುವನು.

ಬಿರುದು: ೧. ರಾಯ; ೨. ಸಮರಧುರಂಧರ; ೩. ವೀರಮಾರ್ತಾಂಡ; ೪. ರಣರಂಗ ಸಿಂಗಂ; ೫. ವೈರಿಕುಲ ಕಾಲದಂಡ; ೬. ಭುಜವಿಕ್ರಮಂ; ೭. ಸಮರ ಪರಶುರಾಮಃ; ೮. ಪ್ರತಿಪಕ್ಷರಾಕ್ಷಸಂ; ೯ ಭಟಮಾರಿ; ೧೦. ಸಮ್ಯಕ್ತ್ವ ರತ್ನಾಕರಂ; ೧೧. ಶಾಚಾಭರಣಂ; ೧೨. ಸತ್ಯಯುಧಿಷ್ಠಿರ.

೧೩. ಸುಭಟಚೂಡಾಮಣಿ; ೧೪. ಗುಣರತ್ನಭೂಷಣ; ೧೫. ಕವಿಜನಶೇಖರ—ಮೊದಲಾದ ಬಿರುದುಗಳು ಇದ್ದಂತೆ ತಿಳಿದುಬರುವುದು. ಇವನ ಗುರು ಅಜಿತಸೇನಾಚಾರ್ಯ.

**ಗ್ರಂಥ: ಚತುರ್ವಿಂಶತಿ ತೀರ್ಥಂಕರರ ಚರಿತವು.**

## ೫. ನಾಗವರ್ಮ I.

ಕಾಲ: ಕ್ರಿ. ಶ. ಸುಮಾರು ೯೯೦. ಗ್ರಂಥಗಳು: ೧. ಛಂದೋಂಬುಧಿ. ೨. ಕರ್ನಾಟಕ ಕಾದಂಬರಿ.

ವೆಂಗಿ ವಿಷಯದಲ್ಲಿಯ ಸಪ್ತಗ್ರಾಮಗಳಲ್ಲಿ, ವೆಂಗಿಪಳುವಿನಲ್ಲಿ ಕೌಂಡಿನ್ಯ ಗೋತ್ರೋದ್ಭವನಾದ ವೆಣ್ಣಮಯ್ಯನೆಂಬ ಬ್ರಾಹ್ಮಣನಿದ್ದನು. ಈತನ ಪತ್ನಿ ಕೌಂಡಿಕಬ್ಬೆ; ಮಗ ದಾಮಮಯ್ಯ; ಇವನ ಹೆಂಡತಿ ಕುಂದಕಬ್ಬೆ; ಜ್ಯೇಷ್ಠಪುತ್ರ ವೆಣ್ಣಮಯ್ಯ; ಇವನ ಹೆಂಡತಿ ಪೋಳಕಬ್ಬೆ; ಜ್ಯೇಷ್ಠಪುತ್ರ ನಾಗವರ್ಮ I. ನಾಕಿ, ಸಯ್ಯಡಿಯಾತ ಎಂಬ ಹೆಸರೂ ಇದೆ. ಇವನು ಯುದ್ಧವೀರನೆಂದು ತಿಳಿದುಬರುವುದು. ಬಿರುದು: ೧. ಕವಿರಾಜಹಂಸ. ೨. ಬುಧಾಬ್ಜವನಕಳಹಂಸ. ೩. ಕಂದ ಕಂದರ್ಪ. ೪. ನೆಗಳ್ತೆಗೋಜ. ಛಂದೋಂಬುಧಿ: ಛಂದಶ್ಶಾಸ್ತ್ರ; ಕಾದಂಬರಿ: ಬಾಣಕೃತ ಸಂಸ್ಕೃತ ಕಾದಂಬರಿಗೆ ಚಂಪೂರೂಪವಾದ ಕರ್ಣಾಟಕ ಭಾಷಾಂತರವು. ಇವನ ಬಂಧವು ಲಲಿತವಾಗಿಯೂ, ಮಧುರವಾಗಿಯೂ, ಭಾವಗರ್ಭಿತವಾಗಿಯೂ ಹೃದಯಂಗಮವಾಗಿಯೂ ಇದೆ.

## ೬. ರನ್ನ

ಕಾಲ: ಕ್ರಿ. ಶ. ೯೪೯. ಗ್ರಂಥ: ೧. ಸಾಹಸಭೀಮ ವಿಜಯ (ಗದಾಯುದ್ಧ). ೨. ಅಜಿತಪುರಾಣ. ೩. ರನ್ನ ಕಂದ (ನಿಘಂಟು). ೪. ಪರಶುರಾಮ ಚರಿತೆ. ೫. ಚಕ್ರೇಶ್ವರ ಚರಿತೆ–ಕೊನೆಯ ಎರಡು ಸಿಕ್ಕಿಲ್ಲ. ಬಿರುದು: ೧. ಕವಿರತ್ನ. ೨. ಅಭಿನವ ಕವಿಚಕ್ರವರ್ತಿ. ೩. ಕವಿಕುಂಜರಾಂಕುಶ. ೪. ಉಭಯ ಕವಿ:

ಘಟಪ್ರಭಾ ನದೀ ತೀರದ ಮುದುವೊಳಲಲ್ಲಿ ಹುಟ್ಟಿದನು. ೧೦೨೦ರ ವರೆಗೆ ಜೀವಿಸಿದನು. ಈತನ ತಂದೆ ಜಿನವಲ್ಲಭ. ತಾಯಿ ಅಬ್ಬಲಬ್ಬೆ.

ಇವರು ಬಳೆಗಾರರಾಗಿ ವೈಶ್ಯವೃತ್ತಿಯಿಂದ ಜೀವಿಸುತ್ತಿದ್ದರು. ಗುರುಗಳು: ಅಜಿತಸೇನಾಚಾರ್ಯ; ಪೋಷಕ: ಚಾವುಂಡರಾಯ. ಜೈನಕವಿ ಚಾಲುಕ್ಯ ರಾಜನಾದ ಆಹವಮಲ್ಲ ತೈಲಪನಲ್ಲಿ ಆಸ್ಥಾನ ಕವಿಯಾಗಿದ್ದನು. ಗ್ರಂಥಗಳು: ೧. ಗದಾಯುದ್ಧ: ತೈಲಪನ ಮಗನಾದ ಇರಿವ ಬೆಡಂಗ ಸತ್ಯಾಶ್ರಯನು ವಿರೋಧಿಯಾದ ಚೋಳ ರಾಜನೊಡನೆ ಗೆದ್ದ ಘಟನೆಯನ್ನು ನೋಡಿ ಮೆಚ್ಚಿ, ಆತನನ್ನು ಭೀಮನೊಡನೆ ಹೋಲಿಸಿ, ಈ ಗ್ರಂಥವನ್ನು ಬರೆದಿರುವನು. ೨. ಅಜಿತಪುರಾಣ, ಚಂಪೂ ಕಾವ್ಯ. ಎರಡನೆಯ ತೀರ್ಥಂಕರನಾದ ಅಜಿತನಾಥನ ಚರಿತೆ. ಈ ಪುರಾಣಕ್ಕೆ 'ಕಾವ್ಯರತ್ನ' 'ಪುರಾಣ ತಿಲಕ' ಎಂಬ ಹೆಸರುಗಳಿವೆ. ೩. ರನ್ನಕಂದ: ಒಂದು ನಿಘಂಟು. ಇವನು ಪ್ರತಿಭಾಶಾಲಿಯಾದ ಕವಿ. ಪದ್ಯವನ್ನು ಪ್ರಾರಂಭಿಸಿದನೆಂದರೆ ಮಧ್ಯದಲ್ಲಿ ಆವ ತಡೆಯೂ ಇಲ್ಲದೆ, ಕಾರಂಜಿಯ ನೀರು ಹರಿದಂತೆ ಇವನ ಕವಿತಾಪ್ರವಾಹವು ರಭಸದಿಂದ ಸಾಗುತ್ತಿತ್ತು.

## ೭. ಶಾಂತಿನಾಥ

ಕಾಲ: ೧೦೬೮. ಗ್ರಂಥ: ಸುಕುಮಾರ ಚರಿತ. ಲಕ್ಷ್ಮೀನೃಪನ ಮಂತ್ರಿಯಾಗಿದ್ದನು. ಈತನು ಜೈನ ಕವಿ. ಇವನ ಗುರು ವರ್ಧಮಾನ ವ್ರತಿ; ತಂದೆ ಗೋವಿಂದರಾಜ. ಅಣ್ಣ ಕನ್ನಪಾರ್ಯ. ತಮ್ಮ ವಾಗ್ಭೂಷಣನಾದ ರೇವಣ. ಬಿರುದು: ೧. ದಂಡನಾಥ ಪ್ರವರಂ. ೨. ಪರಮಜಿನ ಮತಾಂಭೋಜಿನೀ. ೩. ರಾಜಹಂಸ. ೪. ಸರಸ್ವತೀ ಮುಖ ಮುಕುರಂ ೫. ಸಹಜ ಕವಿ. ೬. ಚತುರ ಕವಿ. ೭. ನಿಸ್ಸಾಯಕವಿ ಸುಕುಮಾರ ಚರಿತ. ಚಂಪೂ ಕಾವ್ಯವಾಗಿದೆ. ಇದು ಶೂರದತ್ತನಿಗೂ ಯಶೋಧರೆಗೂ ಹುಟ್ಟಿದ ಸುಕುಮಾರನೆಂಬ ರಾಜಕುಮಾರನ ಚರಿತ.

## ೮. ನಾಗಚಂದ್ರ

ಕಾಲ: ಸುಮಾರು ೧೧೦೦. ಗ್ರಂಥಗಳು: ೧. ರಾಮಚಂದ್ರ ಚರಿತ ಪುರಾಣ (ಪಂಪ ರಾಮಾಯಣ). ೨. ಮಲ್ಲಿನಾಥ ಪುರಾಣ. ೩. ಜಿನ ಮುನಿತನಯ. ೪. ಜಿನಾಕ್ಷರ ಮಾಲೆ. ವಿಜಯಪುರವೆ(ಬಿಜಾಪುರ). ಇವನ ಊರಾಗಿರಬಹುದು. ಇವನು ಐಶ್ವರ್ಯವಂತನಾಗಿ ಉನ್ನತಸ್ಥಿತಿ

ಯಲ್ಲಿದ್ದಂತೆ ತಿಳಿದುಬರುವುದು. ಈತನಿಗೆ ಅಭಿನವಪಂಪ ಎಂಬ ಹೆಸರೂ ಇದೆ. ಇವನ ಗುರು ಬಾಲಚಂದ್ರನು. ಕಂತಿಯೆಂಬ ಪ್ರಖ್ಯಾತಳಾದ ಒಬ್ಬ ಕಬ್ಬಿಗಿತಿ ದ್ವಾರಸಮುದ್ರದ ಬಲ್ಲಾಳರಾಯನ ಸಭೆಯಲ್ಲಿ ಪಂಡಿತೆಯಾ ಗಿದ್ದಳು. ಈ ಕಂತಿಗೂ ನಾಗಚಂದ್ರನಿಗೂ ಸಂವಾದಗಳು ನಡೆದಂತೆ ತಿಳಿದುಬರುತ್ತದೆ. ಈತನ ಬಿರುದುಗಳು: ೧. ಭಾರತೀ ಕರ್ಣಪೂರ ೨. ಕವಿತಾ ಮನೋಹರ. ೩. ಸಾಹಿತ್ಯ ವಿದ್ಯಾಧರ. ೪. ಚತುರ ಕವಿಜನಾಸ್ಥಾನ ರತ್ನಪ್ರದೀಪ. ೫. ಸಾಹಿತ್ಯ ಸರ್ವಜ್ಞ. ೬. ಸೂಕ್ತಿಮುಕ್ತಾವತಂಸ. ಈ ಕವಿಯ ಕಾಲ, ದೇಶ, ವಂಶ ಮೊದಲಾದುವುಗಳು ಸರಿಯಾಗಿ ತಿಳಿದು ಬರುವುದಿಲ್ಲ. ರಾಮಾಯಣ: ಚಂಪೂರೂಪ: ಜೈನ ಸಂಪ್ರದಾಯಕ್ಕನು ಸಾರವಾಗಿ ರಚಿಸಲ್ಪಟ್ಟಿದೆ. ಇವನ ಬಂಧವು ಬಹಳ ಲಲಿತವಾಗಿಯೂ ಮನೋಹರವಾಗಿಯೂ ಇದೆ. ಮಲ್ಲಿನಾಥ ಪುರಾಣ: ಹತ್ತೊಂಭತ್ತನೆಯ ತೀರ್ಥಂಕರನಾದ ಮಲ್ಲಿನಾಥನ ಚರಿತ; ಚಂಪೂರೂಪ.

## ೯. ನಯಸೇನ

ಕಾಲ: ೧೧೧೨. ಗ್ರಂಥಗಳು: ಧರ್ಮಾಮೃತ. ೨. ಕನ್ನಡ ವ್ಯಾಕರಣ. ಎರಡನೆಯದು ಸಿಕ್ಕಿಲ್ಲ.

ಈತನು ಜೈನ ಕವಿ. ಈತನ ಊರು ಮುಳುಗುಂದ. ಈತನ ಗುರು ನರೇಂದ್ರಸೇನಮುನಿ. ಇವನ ಬಿರುದು—೧. ಸುಕವಿನಿಕರಪಿಕಮಾಕಂದ, ೨. ಸುಕವಿಜನಮನಃಪದ್ಮಿನೀರಾಜಹಂಸ, ೩. ದಿಗಂಬರದಾಸ, ೪. ನೂತ್ನ ಕವಿತಾವಿಲಾಸ. ಧರ್ಮಾಮೃತ—ಇದಕ್ಕೆ ಕಾವ್ಯರತ್ನವೆಂಬ ಹೆಸರೂ ಇದೆ. ಇವನ ಗ್ರಂಥವು ಲಲಿತವಾಗಿಯೂ ಮೃದುಮಧುರವಾಗಿಯೂ, ನೀತಿಶ್ಲೋಕಪುಂಜರಂಜಿತವಾಗಿಯೂ ಇದೆ.

## ೧೦. ರಾಜಾದಿತ್ಯ

ಕಾಲ: ೧೧೨೦. ಗ್ರಂಥಗಳು: ೧. ವ್ಯವಹಾರ ಗಣಿತ, ೨. ಕ್ಷೇತ್ರ ಗಣಿತ, ೩. ವ್ಯವಹಾರ ರತ್ನ, ೪. ಲೀಲಾವತಿ, ೫. ಚಿತ್ರಹಸುಗೆ, ೬ ಜೈನಗಣಿತ ಸೂತ್ರ ಟೀಕೋದಾಹರಣ.

ಈತನು ಜೈನ ಕವಿ. ರಾಜವರ್ಮ, ಭಾಸ್ಕರ, ಬಾಚ, ಬಾಚೆಯ, ಬಾಚಿರಾಜ ಎಂಬ ಹೆಸರುಗಳೂ ಈತನಿಗಿವೆ. ಬಿರುದು: ೧. ಗಣಿತವಿಲಾಸ, ೨. ಓಜೆವೆಡಂಗ, ೩. ಪದ್ಯವಿದ್ಯಾಧರ. "ಕೊಂಡಿಮಂಡಲಕ್ಕನುಪಮ ರತ್ನಮಂಡನವೆನಿಪ್ಪಪೂವಿನಬಾಗೆ" ಇವನ ಊರು. ಇವನ ಹೆಂಡತಿ ಕನಕಮಾಲೆ. ಗುರು ಶುಭಚಂದ್ರ. ತಂದೆ ಶ್ರೀಪತಿ. ತಾಯಿ ವಸಂತಾಖ್ಯೆ. ಇವನು ವಿಷ್ಣುವರ್ಧನರಾಜನ ಆಸ್ಥಾನಪಂಡಿತ.

ವ್ಯವಹಾರ ಗಣಿತ: ಗದ್ಯಪದ್ಯಾತ್ಮಕವಾಗಿದೆ. ಈ ಗ್ರಂಥವನ್ನು ಐದು ದಿನಗಳಲ್ಲಿ ಬರೆದು ಮುಗಿಸಿರುವನಂತೆ. ಚಿತ್ರಹಸುಗೆ: ಸೂತ್ರಟೀಕಾ ರೂಪವಾಗಿದೆ. ಲೀಲಾವತಿ: ಪದ್ಯರೂಪ ಲೆಕ್ಕಗಳನ್ನು ಮಾಡಿತೋರಿಸಿದೆ.

## ೧೧. ಕರ್ಣಪಾರ್ಯ

ಕಾಲ: ಸುಮಾರು ೧೧೪೦. ಗ್ರಂಥಗಳು: ೧. ನೇಮಿನಾಥ ಪುರಾಣ, ೨. ಮಾಳವೀ ಮಾಧವ, ೩. ವೀರೇಶ ಚರಿತೆ (೨–೩ನೇ ಗ್ರಂಥಗಳು ಸಿಕ್ಕಿಲ್ಲ)

ಈತನು ಜೈನಕವಿ. ಇವನ ಹೆಸರು: ೧. ಕರ್ಣಪ, ೨. ಕಣ್ಣಪ, ೩. ಕಣ್ಣಮಯ್ಯ, ೪. ಕನ್ನಮಯ್ಯ, ೫. ಕಣ್ಣಮ ಎಂದು. ಬಿರುದು: ೧. ಪರಮ ಜಿನಮತಕ್ಷೀರವಾರಾಶಿಚಂದ್ರ, ೨. ಭವ್ಯವನಜವನಮಾರ್ತಾಂಡ, ೩. ಸಹಜಕವಿತಾ ರಸೋದಯ. ಗುರು ಮಲಧಾರಿದೇವನ ಶಿಷ್ಯ ಕಲ್ಯಾಣಕೀರ್ತಿ. ನೇಮಿನಾಥ ಪುರಾಣ: ೨೨ನೆಯ ತೀರ್ಥಂಕರನಾದ ನೇಮಿನಾಥನ ಚರಿತ–ಚಂಪೂರೂಪ. ಕತೆ ಮಾತ್ರ ಸುಬೋಧವಾಗಿದ್ದೂ ಲಲಿತವಾಗಿಯೂ ಇದೆ.

## ೧೨. ದುರ್ಗಸಿಂಹ

ಕಾಲ: ಸುಮಾರು ೧೧೪೫. ಗ್ರಂಥ: ಪಂಚತಂತ್ರ.

ಕರ್ಣಾಟಕದ ಕಿಸುನಾಡಿನಲ್ಲಿ, ಸಯ್ಯಡಿ ಎಂಬ ಅಗ್ರಹಾರದಲ್ಲಿ, ಬ್ರಾಹ್ಮಣನಾದ ದುರ್ಗಮಯ್ಯನಿದ್ದನು. ಇವನ ಮಗ ಈಶ್ವರಾರ್ಯ. ಇವನ ಹೆಂಡತಿ ರೇವಕಬ್ಬೆ. ಮಗ ಕವಿ ದುರ್ಗಸಿಂಹ. ಬ್ರಾಹ್ಮಣ ಕವಿ. ಕಮ್ಮೆ ಕುಲದವನು. ಗೌತಮ ಗೋತ್ರ. ಇವನ ಗುರು 'ಮಹಾಯೋಗಿ' ಶಂಕರಭಟ್ಟ. ಇವನ ಸ್ವಾಮಿ ಜಗದೇಕಮಲ್ಲ.

ಪಂಚತಂತ್ರ: ಚಂಪೂರೂಪ. ಇದರಲ್ಲಿ, ೧. ಭೇದಪ್ರಕರಣ ವರ್ಣನಂ, ೨. ಪರೀಕ್ಷಾವರ್ಣನಂ, ೩. ವಿಶ್ವಾಸಪ್ರಕರಣವರ್ಣನಂ, ೪. ವಂಚನಾಪ್ರಕರಣವರ್ಣನಂ, ೫. ಮಿತ್ರಕಾರ್ಯಪ್ರಕರಣಂ ಎಂಬ ಐದು ತಂತ್ರಗಳಿವೆ.

## ೧೩. ಬಸವ

ಕಾಲ: ಸುಮಾರು ೧೧೬೦. ಗ್ರಂಥಗಳು: ೧. ಷಟ್ಸ್ಥಲ ವಚನ, ೨. ಶಿಖಾರತ್ನ ವಚನ, ೩. ಕಾಲಜ್ಞಾನ ವಚನ, ೪. ಮಂತ್ರಗೋಪ್ಯ.

ಇವನು ವೀರಶೈವ ಕವಿ. ಕರ್ಣಾಟಕದ ಇಂಗಳೇಶ್ವರ ಬಾಗವಾಡಿ ಯಲ್ಲಿ ಹುಟ್ಟಿದನು. ಇವನ ಅಜ್ಜ ಲಿಂಗಭಟ್ಟ. ತಂದೆ ಮಾದಿರಾಜ. ತಾಯಿ ಮಾದಾಂಬಿಕೆ. ಒಡಹುಟ್ಟಿದವಳು ನಾಗಾಂಬಿಕೆ. ಈಕೆಯ ಮಗನೇ ಚೆನ್ನಬಸವ. ಬಸವನ ಸೋದರಮಾವನು ಬಲದೇವನು. ಈತನು ಬಿಜ್ಜಳರಾಜನಲ್ಲಿ (೧೧೫೬–೧೧೬೭) ಪ್ರಧಾನಿಯಾಗಿದ್ದನು. ಬಲದೇವನ ಮಗಳಾದ ಗಂಗಾಂಬಿಕೆ ಬಸವನ ಹೆಂಡತಿ. ಈತನಿಗೆ ನೀಲಲೋಚನೆ ಅಥವಾ ನೀಲಮ್ಮ ಎಂಬ ಮತ್ತೊಬ್ಬಳು ಹೆಂಡತಿಯಿದ್ದಂತೆ ತಿಳಿದು ಬರು ವುದು. ಇವನಿಗೆ ಬಾಲಸಂಗಯ್ಯನೆಂಬ ಮಗನಿದ್ದನು.

ಷಟ್ಸ್ಥಲ ವಚನ: ವೀರಶೈವ ಸಿದ್ಧಾಂತ ಪ್ರತಿಪಾದಕವಾದ ಗ್ರಂಥ. ಶಿಖಾರತ್ನ ವಚನ: ಹದಿನಾಲ್ಕು ವಚನಗಳಿವೆ. ಕಾಲಜ್ಞಾನ: ಅರು ವತ್ತನಾಲ್ಕು ಪದಗಳಿವೆ. ಮಂತ್ರಗೋಪ್ಯ: ಹಾಡಿನ ರೂಪ.

## ೧೪. ಪ್ರಭುದೇವ

ಕಾಲ: ಸುಮಾರು ೧೧೬೦. ಗ್ರಂಥಗಳು: ೧. ಷಟ್ಸ್ಥಲಜ್ಞಾನ ಚಾರಿತ್ರ, ೨. ಶೂನ್ಯ ಸಂಪಾದನೆ, ೩. ಮಂತ್ರಗೋಪ್ಯ, ೪. ಸೃಷ್ಟಿಯ ವಚನ, ೫. ಬೆಡಗಿನ ವಚನ, ೬. ಮಂತ್ರಮಹಾತ್ಮ್ಯ, ೭. ಕಾಲಜ್ಞಾನ ವಚನ.

ಇವನಿಗೆ ಅಲ್ಲಮ ಎಂಬ ಹೆಸರಿದೆ. ಬಿರುದು: ಮಾಯಾಕೋಳಾ ಹಳ. ಇವನು ವೀರಶೈವ ಕವಿ. ಈತನ ತಂದೆ ನಿರಹಂಕಾರ. ತಾಯಿ ಸುಜ್ಞಾನಿ. ಇವನು ಬಹಳ ಪ್ರಖ್ಯಾತನು. ಇವನ ವಿಷಯವಾಗಿ ಪ್ರಭು

ಲಿಂಗಲೀಲೆ, ಪ್ರಭುದೇವರಪುರಾಣ, ಪ್ರಭುನಟನ ತಾರಾವಳಿ, ಪ್ರಭು ಚರಿತ್ರೆ, ಪ್ರಭುಗೀತೆ ಮೊದಲಾದ ಗ್ರಂಥಗಳು ಹುಟ್ಟಿವೆ.

## ೧೫. ಮಹಾದೇವಿಯಕ್ಕ

ಕಾಲ: ಸುಮಾರು ೧೧೬೦. ಗ್ರಂಥಗಳು: ೧. ವಚನಗಳು, ೨. ಯೋಗಾಂಗ ತ್ರಿವಿಧಿ, ೩. ಸೃಷ್ಟಿಯ ವಚನ, ೪ ಅಕ್ಕಗಳ ಪೀಠಿಕೆ.

ಇವಳು ವೀರಶೈವ ಕವಯಿತ್ರಿ. ಉಡುತಡಿಯೆಂಬಲ್ಲಿ ಹುಟ್ಟಿದಳು. ಆ ಪಟ್ಟಣದ ದೊರೆ ಕೌಶಿಕನು ಇವಳನ್ನು ಮದುವೆಯಾಗಬೇಕೆಂದು ಬಯಸಲು, 'ಭವಿ'ಯೆಂದು ಅವನನ್ನು ಪರಿಹರಿಸಿ, ವಿರಕ್ತಳಾಗಿ ಕಲ್ಯಾಣಕ್ಕೆ ಹೋಗಿ, ಬಸವಾದಿಗಳೊಡನೆ ಇದ್ದಳು.

ವಚನ: ಈಕೆಯ ವಚನದಲ್ಲಿ 'ಚೆನ್ನಮಲ್ಲಿಕಾರ್ಜುನ' ಎಂಬ ಅಂಕಿತ ಇದೆ.

## ೧೬. ಹರೀಶ್ವರ (ಹರಿಹರ)

ಕಾಲ: ಸುಮಾರು ೧೧೬೫. ಗ್ರಂಥಗಳು: ೧. ಗಿರಿಜಾ ಕಲ್ಯಾಣ, ೨. ಪಂಪಾಶತಕ, ೩. ಮುಡಿಯ ಅಷ್ಟಕ, ೪. ಶಿವಗಣದ ರಗಳೆ, ೫. ರಕ್ಷಾ ಶತಕ, ೬. ಶಿವಾಕ್ಷರಮಾಲೆ (ಕೊನೆಯದು ಸಿಕ್ಕಿಲ್ಲ)

ಇವನು ವೀರಶೈವ ಕವಿ. ನರಸಿಂಹಬಲ್ಲಾಳನ ಆಳಿಕೆಯಲ್ಲಿ ಹಳೆಯ ಬೀಡಿನಲ್ಲಿ 'ಕರಣಿಕರಕುಲತಿಲಕ'ನಾಗಿದ್ದನು. ಈತನ ಗುರು—ಮಾಯಿದೇವ. ಸೋದರಳಿಯ—ರಾಘವಾಂಕ. ಈತನ ಕಾಲದಲ್ಲಿ ಕೆರೆಯ ಪದ್ಮರಸನು ನರಸಿಂಹನ ಮಂತ್ರಿಯಾಗಿದ್ದನು. ಪಂಪಾಕ್ಷೇತ್ರದಲ್ಲಿ ಹಂಪೆಯ ಶಂಕರಾಚಾರ್ಯರ ಮಗ ಮಾದರಸನು. ಅವನ ಮಗ ಹಂಪೆಯ ಹರೀಶ್ವರನು. ಈತನಿಗೆ ಹರಿದೇವ, ಹರಿಹರ, ಹರಿಗ, ಹರಿ, ಹರಿಯಣ್ಣ ಪಂಡಿತ, ಹಂಪೆಯ ಹರೀಶ್ವರ ಎಂಬ ಹೆಸರುಗಳಿವೆ.

ಗಿರಿಜಾಕಲ್ಯಾಣ: ಇದರಲ್ಲಿ ಶಿವನಿಗೂ ಪಾರ್ವತಿಗೂ ನಡೆದ ವಿವಾಹವು ವರ್ಣಿಸಲ್ಪಟ್ಟಿದೆ. ಇದು ಚಂಪೂಕಾವ್ಯ. ಈತನ ಬಂಧವು ಜೈನಶೈಲಿಯನ್ನು ಅನುಸರಿಸಿ ಲಲಿತವಾಗಿಯೂ ಮೃದುಮಧುರ ಗಂಭೀರವಾಗಿಯೂ

ಇದೆ. ಬಿರುದು: ೧. ಸರಸಕವಿ ಸಾರ್ವಭೌಮ, ೨. ಚತುರಕವಿ ಚತುರ್ಮುಖ, ೩. ಭಾವಕವಿಭಾಳಲೋಚ, ೪. ವರ್ಣಕಕವಿ ಕರ್ಣಾವತಂಸ, ೫. ವಸ್ತುಕಕವಿ ಮಸ್ತಕನ್ಯಸ್ತಹಸ್ತ, ೬. ಗಿರಿವಜ್ರದಂಡ, ೭. ಉಭಯಕವಿಶರಭಭೇರುಂಡ, ೮. ಲೋಕಾರಾಧ್ಯ.

## ೧೭. ರಾಘವಾಂಕ

ಕಾಲ: ಸುಮಾರು ೧೧೬೫. ಗ್ರಂಥಗಳು: ೧. ಹರಿಶ್ಚಂದ್ರ ಕಾವ್ಯ, ೨. ಸೋಮನಾಥ ಚರಿತ್ರೆ, ೩. ಸಿದ್ಧರಾಮ ಪುರಾಣ, ೭. ವೀರೇಶ್ವರ ಚರಿತೆ, ೫. ಶರಭ ಚಾರಿತ್ರ, ೬. ಹರಿಹರ ಮಹತ್ವ. (ಕೊನೆಯ ಮೂರು ಗ್ರಂಥಗಳು ಸಿಕ್ಕಿಲ್ಲ.)

ಈತನು ಕುಂತಳ ದೇಶದಲ್ಲಿ ತುಂಗಭದ್ರಾ ತೀರದಲ್ಲಿರುವ ಪಂಪಾಪುರದಲ್ಲಿ ಹುಟ್ಟಿದನು. ಇವನ ತಂದೆ ಮಹದೇವಭಟ್ಟ. ತಾಯಿ ರುದ್ರಾಣಿ. ಸೋದರಮಾವ ಮತ್ತು ಗುರು—ಹಂಪೆಯ ಹರೀಶ್ವರ. ಬಿರುದು: ಉಭಯಕವಿ ಶರಭಭೇರುಂಡ, ೨. ಉಭಯಕವಿ ಕಮಲರವಿ, ೩. ಅಘಟಕವಿನಿಕರಘೌದಂತ. ಈ ಕವಿಯು ತಾನು "ಹರೀಶ್ವರನ ವರಸುತಂ" ಎಂದು ಹೇಳಿಕೊಂಡಿರುತ್ತಾನೆ. ಇವನು ಹರೀಶ್ವರನ ವರಬಲದಿಂದ ಹುಟ್ಟಿದವನೆಂದು ತಿಳಿಯಬಹುದು. ಅಲ್ಲದೆ "ಹರಿದೇವಸುತ ರಾಘವ" ಎಂದು ಹೇಳಿದೆ. ಹರೀಶ್ವರನ ಸುತನಾದುದರಿಂದ ಹೀಗೆ ಹೇಳಿರಬೇಕು. ವೀರಶೈವ ಕವಿಗಳೆಲ್ಲಾ ಈತನನ್ನು ಸ್ತುತಿಸಿದ್ದಾರೆ.

ಹರಿಶ್ಚಂದ್ರ ಕಾವ್ಯ: ಹರಿಶ್ಚಂದ್ರನ ಚರಿತ್ರೆಯು ವರ್ಣಿತವಾಗಿದೆ. ಇದರಲ್ಲಿ ೭೭೫ ವಾರ್ಧಿಕ ಷಟ್ಪದಿ, ಒಂದು ರಗಳೆಯೂ ಇದೆ. ಸೋಮನಾಥ ಚರಿತೆ: ಪುಲಿಗೆರೆಯ ಸೋಮಯ್ಯನ ಚರಿತ್ರವಾಗಿದೆ. ಸಿದ್ಧರಾಮ ಪುರಾಣ: ಸೊನ್ನಲಾಪುರದ ಸಿದ್ಧರಾಮನ ಚರಿತ. ವಾರ್ಧಿಕ ಷಟ್ಪದಿ. ವೀರೇಶ ಚರಿತೆ: ವೀರಭದ್ರನು ದಕ್ಷಾಧ್ವರವನ್ನು ನಾಶಮಾಡಿದ ಕತೆ. ಶರಭ ಚಾರಿತ್ರ: ಹಿರಣ್ಯಕಶಿಪುವಿನ ರಕ್ತಪಾನದಿಂದ ಮತ್ತನಾದ ನರಸಿಂಹನನ್ನು ವೀರಭದ್ರನು ಶರಭಾಕಾರದಿಂದ ಶಿಕ್ಷಿಸಿದ ಕತೆ. ಹರಿಹರ ಮಹತ್ವ: ಹಂಪೆಯ ಹರೀಶ್ವರನ ಮಹಾತ್ಮ್ಯ ವರ್ಣಿತವಾಗಿದೆ. ಇವನ ಬಂಧವು

ಪ್ರೌಢವಾಗಿಯೂ, ಅರ್ಥಗಾಂಭೀರ್ಯವುಳ್ಳದಾಗಿಯೂ, ದೇಶ್ಯಪದಭೂಯಿಷ್ಠವಾಗಿಯೂ ಇದೆ.

## ೧೮. ನೇಮಿಚಂದ್ರ

ಕಾಲ: ಸುಮಾರು ೧೧೭೦. ಗ್ರಂಥಗಳು: ೧. ಲೀಲಾವತಿ, ೨. ನೇಮಿನಾಥ ಪುರಾಣ.

ಇವನು ಜೈನಕವಿ. ಲಕ್ಷ್ಮಣರಾಜ, ವೀರಬಲ್ಲಾಳ ಇಬ್ಬರು ರಾಜರ ಆಸ್ಥಾನಗಳಲ್ಲಿ ಪ್ರಸಿದ್ಧನು. ಈತನಿಗೆ ಅಂಗಿಕ ನೇಮಿಚಂದ್ರ ಎಂಬ ಹೆಸರೂ ಇದೆ. ಬಿರುದು: ೧. ಕಲಾಕಾಂತ, ೨. ಕವಿರಾಜಮಲ್ಲ, ೩. ಕವಿಧವಳ, ೪. ಶೃಂಗಾರ ಕಾರಾಗ್ರಹ, ೫. ಕವಿರಾಜಕುಂಜರ, ೬. ಸಾಹಿತ್ಯ ವಿದ್ಯಾಧರ, ೭. ವಿದ್ಯಾಪಥೂವಲ್ಲಭ, ೮. ಸುಕವಿಕಂಠಾಭರಣ, ೯. ವಿಶ್ವವಿದ್ಯಾವಿನೋದ, ೧೦. ಭಾರತೀ ಚಿತ್ತಚೋರ, ೧೧. ಚತುರ್ಭಾಷಾ ಕವಿಚಕ್ರವರ್ತಿ, ೧೨. ಸುಕರ ಕವಿಶೇಖರ, ೧೩. ಕೃತಿಕುಲದೀಪ, ೧೪. ವಾಗ್ವಲ್ಲಕೀವೈಣಿಕ.

ಲೀಲಾವತಿ: ಇದು ಚಂಪೂಗ್ರಂಥ. ಶೃಂಗಾರ ಕಾವ್ಯ. ನೇಮಿನಾಥ: ೨೨ನೆಯ ತೀರ್ಥಂಕರನಾದ ನೇಮಿನಾಥನ ಚರಿತವು. ಈತನ ಬಂಧವು ಗಂಭೀರವಾಗಿಯೂ, ಶೃಂಗಾರರಸಭರಿತವಾಗಿಯೂ, ಹೃದಯಂಗಮವಾಗಿಯೂ ಇದೆ. ಇವನ ಪ್ರತಿಭೆಯೂ, ಶಬ್ದಸಾಮಾಗ್ರಿಯೂ, ವಾಗ್ಧೋರಣೆಯೂ ಅನಾದೃಶವಾಗಿದೆ.

## ೧೯. ರುದ್ರಭಟ್ಟ

ಕಾಲ: ಸುಮಾರು ೧೧೮೦ ಗ್ರಂಥ: ಜಗನ್ನಾಥ ವಿಜಯ. ರಸಕಲಿಕೆಯೆಂಬ ಗ್ರಂಥವನ್ನೂ ಬರೆದಂತೆ ತೋರುವುದು. ಈತನು ಬ್ರಾಹ್ಮಣ ಕವಿ. ಬಿರುದು: ೧. ಕೃತಿಶಾರದಾಭ್ರ ಚಂದ್ರಾಪ. ೨. ಕವಿರಾಜ.

ಜಗನ್ನಾಥ ವಿಜಯ: ಚಂಪೂರೂಪ. ಹದಿನೆಂಟು ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿದೆ. ಇದರಲ್ಲಿ ಕೃಷ್ಣನ ಜನನದಿಂದ ಮೊದಲ್ಗೊಂಡು ಬಾಣಾಸುರ ಯುದ್ಧದ ವರೆಗೆ ವಿಷ್ಣುಪುರಾಣದ ಕತೆಯು ಹೇಳಲ್ಪಟ್ಟಿದೆ.

ಈ ಕವಿಯ ಬಂಧವು ಪ್ರೌಢವಾಗಿದೆ. ಬಹಳಮಟ್ಟಿಗೆ ಜೈನಶರಣಿಯನ್ನು ಅನುಸರಿಸಿದೆ.

## ೨೦. ಅಗ್ಗಳ

ಕಾಲ: ೧೧೮೯. ಗ್ರಂಥ: ಚಂದ್ರಪ್ರಭಾ ಪುರಾಣ.

ಇವನು ಜೈನಕವಿ ಮೂಲ ಸಂಘ ದೇಶೀಯ ಗಣ ಪುಸ್ತಕಗಚ್ಛ ಕೊಂಡಕುಂದ ವಂಶದಲ್ಲಿ ಹುಟ್ಟಿದನು. ಇವನ ತಂದೆ ಶಾಂತೀಶ. ತಾಯಿ ಪೋಚಾಂಬಿಕೆ. ಗುರು ಶ್ರುತಕೀರ್ತಿ ತ್ರೈವಿದ್ಯ. ಈತನು ರಾಜಸಭೆಯಲ್ಲಿ ಪ್ರಸಿದ್ಧ ಕವಿಯಾಗಿದ್ದಂತೆ ತಿಳಿದುಬರುತ್ತದೆ. "ಸುರರಾಜಾರ್ಚಿತ ಇಂಗಳೇಶ್ವರ ಪುರತೀರ್ಥ ಚಂದ್ರಪ್ರಭಂ ಪರಮೇಶಂ" ಎಂದುದರಿಂದ ಈತನ ಊರು ಇಂಗಳೇಶ್ವರ ಎಂದೂಹಿಸಬಹುದು.

ಬಿರುದು: ಜೈನಜನಮನೋಹರ ಚರಿತ. ೨. ಕವಿಕುಳಕಳಭ ವ್ರಾತಯೂದಾಧಿನಾಥ. ೩. ಕಾವ್ಯಕರ್ಣಧಾರ. ೪. ಭಾರತೀ ಭಾಳ ನೇತ್ರ. ೫. ಸಾಹಿತ್ಯವಿದ್ಯಾವಿನೋದ. ೬. ಜಿನಸಮಯಸರಸ್ಸಾರ ಕೇಳೀಮರಾಳ. ೭. ಸುಲಲಿತ ಕವಿತಾನರ್ತಕೀ ನೃತ್ಯರಂಗ (ಈ ಕೊನೆಯ ಗ್ರಂಥವನ್ನು ೧೧೮೯ರಲ್ಲಿ ರಚಿಸಿದನು.)

ಚಂದ್ರಪ್ರಭ ಪುರಾಣ: ಎಂಟನೆಯ ತೀರ್ಥಂಕರನಾದ ಚಂದ್ರಪ್ರಭನ ಚರಿತವು. ಹದಿನಾರು ಆಶ್ವಾಸಗಳಾಗಿ, ವಿಭಾಗಿಸಲ್ಪಟ್ಟಿದೆ. ಈ ಗ್ರಂಥವನ್ನು ಈತನ ಗುರುವಾದ ಶ್ರುತಕೀರ್ತಿಯ ಆಜ್ಞಾನುಸಾರವಾಗಿ ಬರೆದಿರುವಂತೆ ತೋರುವುದು.

ಇವನ ಬಂಧವು ಅತಿ ಪ್ರೌಢವಾಗಿಯೂ ಸಂಸ್ಕೃತಪದಭೂಯಿಷ್ಠವಾಗಿಯೂ ಇದೆ.

## ೨೧ ಪಾಲ್ಕುರಿಕೆ ಸೋಮನಾಥ

ಕಾಲ: ಸುಮಾರು ೧೧೯೫. ಗ್ರಂಥಗಳು: ೧. ಆರಾಧ್ಯಚಾರಿತ್ರ, ೨. ಬಸವಪುರಾಣ, ೩. ಚತುರ್ವೇದಸಾರ ಸಂಗ್ರಹ—ತೆಲುಗು ಭಾಷೆಯಲ್ಲಿದೆ, ೪. ಅನ್ಯವಾದ ಕೋಲಾಹಲ, ೫. ಬಸವಣ್ಣನ ಪಂಚಗದ್ಯ, ೬. ಸೋಮನಾಥ ಭಾಷ್ಯ—ಸಂಸ್ಕೃತದಲ್ಲಿದೆ, ೭. ಗಂಗೋದಯ ಕಾವ್ಯವೂ ಸಂಸ್ಕೃತದಲ್ಲೇ

ಇರಬಹುದು, ೮. ಸದ್ಗುರು ರಗಳೆ, ೯. ಚೆನ್ನಬಸವ ರಗಳೆ, ೧೦. ಶರಣಬಸವ ರಗಳೆ, ೧೧. ಶೀಲಸಂಪಾದನೆ, ೧೨. ಸೋಮೇಶ್ವರ ಶತಕ, ೧೩. ಸಹಸ್ರಗಣ ನಾಮ, ೧೪. ಪಂಚರತ್ನ—(ಕೊನೆಯ ಎಂಟು ಇವುಗಳು ಕನ್ನಡದಲ್ಲಿವೆ.)

ಈತನು ವೀರಶೈವ ಕವಿ. ಗೋದಾವರಿ ಜಿಲ್ಲೆಯ ಪಾಲ್ಕುರಿಕೆಯಲ್ಲಿ ಹುಟ್ಟಿದನು. ಈತನು ವೇಮನಾರಾಧ್ಯನ ಶಿಷ್ಯನಾದ ಗುರು ಲಿಂಗಾರ್ಯನ ಶಿಷ್ಯನೆಂದೂ, ಬಸವೇಶನ ಶಿಷ್ಯನಾದ ಬಸವೇಶನ ಮಗನೆಂದೂ ತಿಳಿಯಬರುವುದು. ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರದಲ್ಲಿ ಪಾಲ್ಕುರಿಕೆ ಸೋಮನಾಥನು ರಾಮಿದೇವಯ್ಯ-ಮಹಾದೇವಿ ಇವರುಗಳ ಮಗನೆಂದೂ ಹೇಳಿದೆ. ಈತನು ಗಣಪುರದ ಅರಸನಾದ ಜಗದೇಕ ಮಲ್ಲನಿಂದ ಲಿಂಗ ಮುದ್ರೆಯ ಭೂಮಿಯನ್ನು ಪಡೆದನು. ಅರುವತ್ತನಾಲ್ಕು ಶೀಲಗಳನ್ನು ನಡೆಸುತ್ತಿದ್ದನು. ಮೊಸರುಕುರಿಕೆಯ ಶಾಸ್ತ್ರಿ, ಅಜ್ಯಕುರಿಕೆಯ ಶಾಸ್ತ್ರಿ— ಇವರುಗಳೊಡನೆ ವಾದ ಮಾಡಿ ಜಯಿಸಿದನು. ವೈಷ್ಣವನಾದ ಚಕ್ರಪಾಣಿ ರಂಗನಾಥನನ್ನು ವಾದದಲ್ಲಿ ಸೋಲಿಸಿ, ತನ್ನ ಮಗ ಚತುರ್ಮುಖ ಬಸವೇಶನಿಂದ ದೀಕ್ಷೆಯನ್ನು ಕೊಡಿಸಿದನು. ಪಾಲ್ಕುರಿಕೆಯಿಂದ ಕರ್ಣಾಟಕದ ಕಳ್ಳೆಯಕ್ಕೆ ಬಂದು ಬಸವನನ್ನು ಸ್ತುತಿಸಿದನು. ಈಶ್ವರನು ಕರೆದರೂ, ಕೈಲಾಸಕ್ಕೆ ಹೋಗದೆ, ಅಲ್ಲಿಯೇ ಇದ್ದು ಸಮಾಧಿಯಲ್ಲಿ ಕುಳಿತು ಮಣ್ಣು ಮುಚ್ಚಿಸಿಕೊಂಡು ಅಲ್ಲಿಯೇ ಅಂತ್ಯಹೊಂದಿದನು. ಬಿರುದು: ೧. ತತ್ವ ವಿದ್ಯಾಕಲಾಪ, ೨. ಕವಿತಾಸಾರ, ೩. ಅನ್ಯದೈವ ಕೋಲಾಹಳ, ೪. ಪ್ರತ್ಯಕ್ಷ ಭೃಂಗೀಶವತಾರ.

ಶೀಲ ಸಂಪಾದನೆ: ವಚನ ರೂಪವಾದ ಗ್ರಂಥ. ವೀರಶೈವ ಅರುವತ್ತನಾಲ್ಕು ಶೀಲಗಳನ್ನು ಹೇಳಿದೆ. ಸೋಮೇಶ್ವರ ಶತಕ: ಈ ಶತಕಕ್ಕೆ "ಸೋಮಾರಾಧ್ಯ ಶತಕ" ಎಂಬ ಹೆಸರಿದೆ. ಇದು ಬಹಳ ಅಶುದ್ಧವಾಗಿದೆ. ವ್ಯಾಕರಣ ವಿರುದ್ಧವಾದ ಅನೇಕ ಪ್ರಯೋಗಗಳಿವೆ. ಸಂಸ್ಕೃತದಲ್ಲಿ ಪಂಡಿತನಾದ ಸೋಮನಾಥನು ರಚಿಸಿದನೆಂದು ಹೇಳುವುದು ಕಷ್ಟ. ಅಲ್ಲದೆ ಶತಕಕಾರಣ ಲಿಂಗವು ಪುಲಿಗೆರೆಯಲ್ಲಿದ್ದಂತೆ ತಿಳಿಯುತ್ತದೆ. ಪಾಲ್ಕುರಿಕೆಯು ತನ್ನ ಸಂಸ್ಕೃತ ಗ್ರಂಥಗಳಲ್ಲಿ 'ಪಾಲ್ಕುರಿಕೆ ಸೋಮ' ಎಂದಿದೆ. ಈ ಶತಕದಲ್ಲಿ ಬರೇ 'ಸೋಮ' ಎಂದಿದೆ.

ವೀರಶೈವ ಗ್ರಂಥಗಳಲ್ಲಿ ಪಾಲ್ಕುರಿಕೆ ಸೋಮಕೃತವೆಂದು ಹೇಳಿರುವ ಗ್ರಂಥಗಳಲ್ಲಿ ಈ ಶತಕವು ಉಕ್ತವಾಗಿಲ್ಲ. ಹೀಗಾಗಿ 'ಪಾಲ್ಕುರಿಕೆ ಸೋಮ' ವಿರಚಿತವಲ್ಲವೆಂದು ಹೇಳಲು ಎಡೆಯುಂಟು. ಆದರೆ ಈತನೇ ಇದನ್ನು ರಚಿಸಿದನೆಂಬ ಪ್ರತೀತಿಯಿದೆ ಇದು ನೀತಿಬೋಧಕ ಗ್ರಂಥ: ೧೦೭ ಮತ್ತೇಭವಿಕ್ರೀಡಿತ ವೃತ್ತಗಳಿವೆ. ಪ್ರತಿ ಪದ್ಯವೂ "ಶ್ರೀ ಚೆನ್ನ ಸೋಮೇಶ್ವರಾ" ಎಂದು ಅಂತ್ಯವಾಗುವುದು.

ಪಂಚರತ್ನ: ಬಸವ ಸ್ತುತಿರೂಪವಾದ ಐದು ವೃತ್ತಗಳಿವೆ.

## ೨೨. ಜನ್ನ

ಕಾಲ: ೧೨೦೯. ಗ್ರಂಥಗಳ : ೧. ಯಶೋಧರ ಚರಿತೆ. ೨. ಅನಂತನಾಥ ಪುರಾಣ. ೩. ಸ್ಮರತಂತ್ರ.

ಇವನು ಜೈನಕವಿ. ಕಮ್ಮೆ ವಂಶದವನು. ಕಾಶ್ಯಪಗೋತ್ರ. ತಂದೆ ಶಂಕರ. ತಾಯಿ ಗಂಗಾದೇವಿ. ಆಷಾಢ ಕೃಷ್ಣ ತ್ರಯೋದಶೀ ರೇವತೀ ನಕ್ಷತ್ರ ಶಿವಯೋಗದಲ್ಲಿ ಹುಟ್ಟಿದನು. ಇವನ ಪತ್ನಿ ರೇಚಯ್ಯನ ಪುತ್ರಿ ಲಕುಮಾದೇವಿ. ಗುರು ಕಾಣೂರ್ಗಣದ ಮಾಧವಚಂದ್ರನ ಶಿಷ್ಯನಾದ ಗಂಡವಿಮುಕ್ತ ರಾಮಚಂದ್ರ ದೇವಮುನಿ. ಜಗದೇಕಮಲ್ಲ (೧೧೩೦-೧೧೫೦)ನಲ್ಲಿ ಕಟಕೋಪಾಧ್ಯಾಯನಾಗಿಯೂ, ಅಭಿನವ ಶರ್ವವರ್ಮನೆಂಬ ಬಿರುದುಳ್ಳ ಎರಡನೆಯ ನಾಗವರ್ಮನು ಇವನಿಗೆ ಉಪಾಧ್ಯಾಯನು. ಸೂಕ್ತಿಸುಧಾರ್ಣವನ್ನು ಬರೆದ ಮಲ್ಲಿಕಾರ್ಜುನ(೧೨೪೫)ನು ಈತನ ಸೋದರಿಯ ಗಂಡ. ಶಬ್ದಮಣಿ ದರ್ಪಣವನ್ನು ಬರೆದ ಕೇಶಿರಾಜನು(೧೨೬೦) ಇವನ ಸೋದರಳಿಯ. ಇವನು ಆಸ್ಥಾನಕವಿಯಾಗಿದ್ದನು ದಂಡಾಧೀಶ ಮಂತ್ರಿಯಾಗಿದ್ದನು. ಹೆಸರು: ಜನ್ನಮರಸ; ಜನ್ನಯ್ಯ; ಜನ್ನಿಗ; ಜನಾರ್ಧನ; ಜಾನಕಿ. ಬಿರುದು: ೧. ಸಾಹಿತ್ಯರತ್ನಾಕರ. ೨. ಕವಿ ಭಾಳಲೋಚನ. ೩. ಕವಿಚಕ್ರವರ್ತಿ. ೪. ವಿನಯಜನಮುಖತಿಲಕ ೫. ರಾಜವಿದ್ವತ್ಸಭಾಕಲಹಂಸ. ೬. ಕವಿವೃಂದಾರಕ ವಾಸವ. ೭. ಕವಿಕಲ್ಪಲತಾಮಂದಾರ.

ಯಶೋಧರ ಚರಿತೆ: ವರ್ಣಕ ಪ್ರಬಂಧ. ಗದ್ಯಭಾಗ ಇಲ್ಲ. ಎಂಟು ಹತ್ತು ವೃತ್ತಗಳ ಹೊರತು ಉಳಿದುವೆಲ್ಲ ಕಂದಪದ್ಯಗಳು. ಒಟ್ಟು ಕಂದಪದ್ಯಗಳು ಮುನ್ನೂರ ಹನ್ನೊಂದು.

ಅನಂತನಾಥ ಪುರಾಣ: ಹದಿನಾಲ್ಕನೆಯ ತೀರ್ಥಂಕರನಾದ ಅನಂತನಾಥನ ಚರಿತ. ಯಶೋಧರ ಚರಿತೆ: ರಚನಾ ಕಾಲದಲ್ಲಿ ಅರಸ ವೀರ ಬಲ್ಲಾಳ (೧೧೭೩-೧೨೨೦) ಅನಂತನಾಥ ಪುರಾಣ: ರಚನಾ ಕಾಲದಲ್ಲಿ ವೀರ ನರಸಿಂಹನು ರಾಜನು (೧೨೨೦–೧೨೩೫). ಬಂಧವು ಲಲಿತವಾಗಿಯೂ, ಮಧುರವಾಗಿಯೂ, ಗಂಭೀರವಾಗಿಯೂ, ಹೃದಯಂಗಮವಾಗಿಯೂ ಇದೆ.

## ೨೩. ಆಂಡಯ್ಯ

ಕಾಲ: ಸುಮಾರು ೧೨೩೫. ಗ್ರಂಥ: ಕಬ್ಬಿಗರ ಕಾವ.

ಇವನು ಜೈನ ಕವಿ. ಇವನ ಅಜ್ಜನು ಆಂಡಯ್ಯ. ಈ ಆಂಡಯ್ಯನಿಗೆ ಶಾಂತ, ಗುಮ್ಮಟ, ವೈಜಣ ಎಂಬ ಮೂವರು ಮಕ್ಕಳು. ಶಾಂತನ ಹೆಂಡತಿ ಬಲ್ಲವ್ವೆ. ಅವಳ ಮಗನೇ ಆಂಡಯ್ಯ. ಕಬ್ಬಿಗರ ಕಾವ: ಈಗ್ರಂಥಕ್ಕೆ ಅಕ್ಕರಿಗರು 'ಸೊಬಗಿನ ಸುಗ್ಗಿ' ಎಂಬ ಹೆಸರಿತ್ತಿರುವರು. ಸಂಸ್ಕೃತಾಭ್ಯಾಸಿಗಳು 'ಮದನ ವಿಜಯ' ಎಂಬ ಹೆಸರನ್ನೂ, 'ಕಾವನಗೆಲ್ಲ' 'ಸಂಸ್ಕೃತ ಸಹೋದರಿ' ಎಂದೂ ಹೆಸರಿಸಿರುವರು. ಗದ್ಯಪದ್ಯಗಳು ಸುಮಾರು ಮುನ್ನೂರ ಐವತ್ತು ಇವೆ. ಬಂಧವು ಲಲಿತವಾಗಿಯೂ, ಮಧುರವಾಗಿಯೂ ಇದೆ.

## ೨೪. ನಾರಣಪ್ಪ

ಕಾಲ: ೧೪೫೦. ಗ್ರಂಥ: ಮಹಾಭಾರತದ ಮೊದಲ ಹತ್ತು ಪರ್ವಗಳು.

ನಾರಣಪ್ಪನು ಗದುಗು ಪ್ರಾಂತದ 'ಕೋಳಿವಾಡ' ಎಂಬ ಹಳ್ಳಿಯಲ್ಲಿದ್ದ ಬ್ರಾಹ್ಮಣ ಕವಿ. ವೀರನಾರಾಯಣ ದೇವರ ಭಕ್ತನು. ವೀರನಾರಾಯಣನ ಅಂಕಿತದಲ್ಲಿ ತನ್ನ ಗ್ರಂಥವನ್ನು ರಚಿಸಿರುತ್ತಾನೆ. ಬಿರುದು: 'ಕುಮಾರ ವ್ಯಾಸ.' ವ್ಯಾಸನ ಮಹಾಭಾರತವನ್ನು ಕನ್ನಡದಲ್ಲಿ ಬರೆದಿರುತ್ತಾನೆ. ಈ ಭಾರತಕ್ಕೆ ದಶಪರ್ವ ಭಾರತವೆಂದೂ ಹೆಸರಿದೆ. ಭಾಮಿನೀ ಷಟ್ಪದಿಯಲ್ಲಿ ಈ ಕಾವ್ಯವನ್ನು ಬರೆದಿರುತ್ತಾನೆ. ಈ ಕಾವ್ಯವು ರಸಭರಿತವಾಗಿದೆ. ಕವಿಯು ತನ್ನ ಶೈಲಿ, ರಸಾನುಗುಣ ಪದಪ್ರಯೋಗ, ಪ್ರತಿಭೆ ಮೊದಲಾದುವುಗಳಿಂದ ಕನ್ನಡ ನಾಡಿನ ಪಂಡಿತ ಪಾಮರರ ವರೆಗೆ ಮೆಚ್ಚುಗೆಗೆ ಪಾತ್ರನಾಗಿದ್ದಾನೆ. ಈ ಕವಿಯ ಕಾಲ ಸುಮಾರು

೧೨೩೦-೧೨೩೫ರ ಒಳಗೆ ಇದ್ದಿರಬೇಕೆಂದು ಶ್ರೀ। ಗೋವಿಂದ ಪೈಗಳವರ ಅಂಬೋಣ.

## ೨೫. ನರಹರಿ

ಕಾಲ: ೧೫೦೦. ಗ್ರಂಥಗಳು: ೧. ತೊರವೆ ರಾಮಾಯಣ. ೨. ಮೈರಾವಣಕಾಳಗ.

ಇವನು ಬ್ರಾಹ್ಮಣ ಕವಿ. ಸೋಲಾಪುರಜಿಲ್ಲೆಯ ತೊರಹೆಯೆಂಬಲ್ಲಿದ್ದನು. ಇವನು ತೊರವೆ ಗ್ರಾಮದ ನರಸಿಂಹ ದೇವನ ಭಕ್ತನು. ಆದುದರಿಂದ ಇವನ ಗ್ರಂಥಗಳಲ್ಲಿ 'ನರಹರಿ' ಎಂಬ ಅಂಕಿತವಿದೆ. ಬಿರುದು: ೧. ಕವಿರಾಜ ಹಂಸ. ೨. ಕುಮಾರ ವಾಲ್ಮೀಕಿ. ಈತನ ಕಾವ್ಯವು ಭಾಮಿನಿ ಷಟ್ಪದಿಯಲ್ಲಿದೆ. ಮೈರಾವಣ ಕಾಳಗವು ಈತನ ಇನ್ನೊಂದು ಕಾವ್ಯ.

ವಾಲ್ಮೀಕಿಯು ಸಂಸ್ಕೃತದಲ್ಲಿ ರಾಮಾಯಣವನ್ನು ಬರೆದ ಕಾರಣ ಈತನನ್ನು 'ಕುಮಾರ ವಾಲ್ಮೀಕಿ' ಎಂದು ಕರೆಯುತ್ತಾರೆ. ಇವನ ಶೈಲಿಯು ಸುಲಭವಾಗಿದೆ. ಕನ್ನಡಿಗರ ಮನ್ನಣೆಗೆ ಪಾತ್ರವಾಗಿದೆ.

## ೨೬. ಲಕ್ಷ್ಮೀಶ

ಕಾಲ: ಕ್ರಿ. ಶ. ಸುಮಾರು ೧೬೦೦. ಗ್ರಂಥ: ಜೈಮಿನೀ ಭಾರತ.

ಈತನು ವೈಷ್ಣವ ಕವಿ. ಭಾರದ್ವಾಜ ಗೋತ್ರದವನು. ಅಣ್ಣಮಾಂಕನ ಸುತನು. ಕಡೂರು ಜಿಲ್ಲೆಯಲ್ಲಿರುವ ದೇವನೂರು ಎಂಬುದು ಈತನ ಹುಟ್ಟೂರು. ದೇವನೂರಿನ ಲಕ್ಷ್ಮೀರಮಣ ಸ್ವಾಮಿಯು ಅಂಕಿತದಲ್ಲಿ ತನ್ನ ಗ್ರಂಥವನ್ನು ಬರೆದಿರುತ್ತಾನೆ. ಬಿರುದು: ೧. ಕರ್ಣಾಟಕ ಕವಿ ಚೂತವನ ಚೈತ್ರ.

ಇವನು ಕನ್ನಡದ ಸುಪ್ರಸಿದ್ಧ ಜನಪ್ರೀತ ಕವಿಗಳಲ್ಲಿ ಒಬ್ಬನು. ಇವನು ಕ್ರಿ. ಶ. ೧೩೩೫-೧೩೫೦ರ ಒಳಗಿನವನು ಎಂದು ಶ್ರೀ। ಗೋವಿಂದ ಪೈಗಳವರ ಅಭಿಪ್ರಾಯ.

"ಸಿರಿಗನ್ನಡಂ ಗೆಲ್ಗೆ"



Edited, Printed & Published by K. V. Shenoy
at the Prabhat Printers, Ltd., Mangalore.